ವರ್ಣಿಸಿರುತ್ತದೆ. ಶ್ರೀಗೌಡಪಾದಾಚಾರ್ಯರು ಬರೆದಿರುವ ನಾಲ್ಕು ಪ್ರಕರಣಗಳುಳ್ಳ ಕಾರಿಕೆಗಳೂ ಶಾಂಕರಭಾಷ್ಯಸಮೇತ ಈ ಉಪನಿಷತ್ತಿಗೆ ಇರುವದು ಒಂದು ವಿಶೇಷ. ವೇದಾಂತಸಾರ ಸಂಗ್ರಹವನ್ನೂ, ಬೌದ್ಧರ ಪ್ರಕ್ರಿಯೆಗೂ ವೇದಾಂತಪ್ರಕ್ರಿಯೆಗೂ ಇರುವ ತಾರತಮ್ಯವನ್ನೂ ಇದರಲ್ಲಿ ಕಾಣಬಹುದು.

*(ನಾಲ್ಕನೆಯ ಮುದ್ರಣ : ೧೯೯೨ – ಪುಟಗಳು ಡೆಮ್ಮಿ ೩೩ + ೩೯೦)*

7. ಐತರೇಯೋಪನಿಷತ್ತು : ಪರಮಾತ್ಮನೇ ಈ ಇಡಿಯ ಜಗತ್ತನ್ನು ಸೃಷ್ಟಿಸಿ ಅದರೊಳಗಿನ ಬೇರೆಬೇರೆಯ ಶರೀರಗಳೊಳಗೆ ಹೊಕ್ಕಿರುವ ಪ್ರಜ್ಞಾನರೂಪನು. ಅವನೇ ಜ್ಞಾನದಿಂದ ಸಂಸಾರಿಯಾಗಿ ಕಾಣುತ್ತಿರುವನು. ಆ ಪರಮಾತ್ಮನ ನಿಜವಾದ ಸ್ವರೂಪವನ್ನು ನಿರ್ಧರಿಸಿಕೊಂಡರೆ ಸದ್ಯೋಮುಕ್ತಿಯಾಗುವದು ಎಂಬುದನ್ನು ವಿವರಿಸುವ ಉಪನಿಷತ್ತು.

*(ಮೂರನೆಯ ಮುದ್ರಣ : ೧೯೯೩ – ಪುಟಗಳು ೧೬+೧೩೦ ಡೆಮ್ಮಿ)*

8. ತೈತ್ತಿರೀಯೋಪನಿಷತ್ತು : ಇದರಲ್ಲಿ ಶೀಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿ – ಎಂಬ ಮೂರು ಭಾಗಗಳಿವೆ. ವೇದಾಂತಸಿದ್ಧಾಂತಕ್ಕೆ ಅಡಿಗಲ್ಲಾಗಿರುವ ಅನೇಕ ವಿಷಯಗಳನ್ನು ಇಲ್ಲಿ ಪ್ರತಿಪಾದಿಸಿದೆ. ಮುಖ್ಯವಾಗಿ ಕರ್ಮಗಳಿಗೂ, ಜ್ಞಾನಕ್ಕೂ ಇರುವ ಸಂಬಂಧ, ಪರಬ್ರಹ್ಮಪ್ರಾಪ್ತಿಗೂ ಅಪರ ಬ್ರಹ್ಮಪ್ರಾಪ್ತಿಗೂ ಇರುವ ತಾರತಮ್ಯ, ನಿರ್ವಿಶೇಷವಾದ ಬ್ರಹ್ಮಾನಂದವನ್ನು ಇಲ್ಲಿಯೇ ಅನುಭವಕ್ಕೆ ತಂದುಕೊಂಡರೆ ಪರಮಮುಕ್ತಿಯು ಲಭಿಸುವದು – ಎಂಬುದರ ರಹಸ್ಯ, ದ್ವೈತವೂ ಜೀವನ ಸಂಸಾರಿತ್ವವೂ ಅವಿದ್ಯಕವೆಂಬುದು, ವಿದ್ಯಾವಿದ್ಯೆಗಳು ಆತ್ಮನ ಧರ್ಮವಲ್ಲ – ಎಂಬಿದೇ ಮುಂತಾದ ವಿಷಯಗಳನ್ನು ಇಲ್ಲಿ ಪ್ರತಿಪಾದಿಸಿದೆ. *(ಮೂರನೆಯ ಮುದ್ರಣ : ೧೯೯೮ – ಪುಟಗಳು ಡೆಮ್ಮಿ ೧೮ + ೩೩೮)*

9. ಛಾಂದೋಗ್ಯೋಪನಿಷತ್ತು : ಈ ಉಪನಿಷತ್ತು ಸಾಮವೇದಕ್ಕೆ ಸೇರಿದ್ದು. ಇದರಲ್ಲಿ ಮೊದಲನೆಯ ಐದು ಅಧ್ಯಾಯಗಳಲ್ಲಿ ಕ್ರಮವಾಗಿ ಉಪಾಸನೆಗಳ ವಿವರವನ್ನು ವಿಸ್ತಾರವಾಗಿ ತಿಳಿಸಿ ಅನಂತರ ಆರನೆಯ ಅಧ್ಯಾಯದಿಂದ ಮುಂದೆ ಆತ್ಮಜ್ಞಾನವನ್ನು ಪ್ರತಿಪಾದಿಸಿದೆ. ಈ ಉಪನಿಷತ್ತಿನಲ್ಲಿರುವ ವಿಷಯವಾಕ್ಯಗಳು ಬ್ರಹ್ಮಸೂತ್ರಭಾಷ್ಯದಲ್ಲಿ ವಿಚಾರಕ್ಕೆ ಬಹಳವಾಗಿ ತೆಗೆದುಕೊಳ್ಳಲ್ಪಟ್ಟಿವೆ. ತತ್ತ್ವಮಸಿ ಮಹಾವಾಕ್ಯದ ವಿಸ್ತಾರವಾದ ವಿವರವು ಇದರಲ್ಲಿ ಅಡಕವಾಗಿದೆ. ಶಾಂಕರವೇದಾಂತದ ಅಮೋಘವಿಚಾರಗಳ ಮನನಕ್ಕೆ ಅತ್ಯುತ್ತಮ ಗ್ರಂಥವಿದು. ಎಂಟು ಅಧ್ಯಾಯಗಳ ಪೂರ ಭಾಷ್ಯ ಗ್ರಂಥವು ಒಂದೇ ಸಂಪುಟವಾಗಿ ಪ್ರಕಟವಾಗಿದೆ.

*(ಎರಡನೆಯ ಮುದ್ರಣ : ೧೯೮೬ – ಪುಟಗಳು ಡೆಮ್ಮಿ ೬೧+೧೦೯೫)*

10. ಬೃಹದಾರಣ್ಯಕೋಪನಿಷತ್ತು (ಭಾಗ1, ಭಾಗ2) : ಹೆಸರಿಗೆ ತಕ್ಕಂತೆ ಉಪನಿಷತ್ತುಗಳಲ್ಲೆಲ್ಲ ದೊಡ್ಡದಾಗಿರುವ, ಶುಕ್ಲಯಜುರ್ವೇದಕ್ಕೆ ಸೇರಿರುವ ಈ ಉಪನಿಷತ್ತಿಗೆ ಆಚಾರ್ಯರು ವಿಸ್ತಾರವಾಗಿ ಭಾಷ್ಯವನ್ನು ಬರೆದಿರುತ್ತಾರೆ. ಮಧುಕಾಂಡವೆಂದು ಪ್ರಸಿದ್ಧವಾಗಿರುವ ಇದರ ಮೊದಲನೆಯ ಎರಡು ಅಧ್ಯಾಯಗಳಲ್ಲಿ ಆಗಮಪ್ರಧಾನವಾಗಿ ತತ್ತ್ವವನ್ನು ತಿಳಿಸಿರುತ್ತದೆ. ಮೂರು – ನಾಲ್ಕು ಅಧ್ಯಾಯಗಳು ಮುನಿಕಾಂಡವೆಂಬ ಹೆಸರಿನಿಂದ ತರ್ಕಪ್ರಧಾನವಾಗಿದ್ದು ಆಗಮ ಉಪಪತ್ತಿಗಳಿಂದ ತತ್ತ್ವವನ್ನು ವಿವರಿಸಿರುತ್ತದೆ. ಕೊನೆಯ ಎರಡು ಅಧ್ಯಾಯಗಳು ಖಿಲಕಾಂಡವೆಂದು ಪ್ರಸಿದ್ಧವಾಗಿದ್ದು ಉಪಾಸನಾಭಾಗವನ್ನು ಒಳಗೊಂಡಿದೆ. ಆತ್ಮಸ್ವರೂಪವನ್ನು ಅವಸ್ಥಾತ್ರಯ ಪರೀಕ್ಷೆಯಿಂದ ಗೊತ್ತುಪಡಿಸುವ ವಿಚಾರಸರಣಿಯು ಇದರಲ್ಲಿ ಬಹಳ ಸುಂದರವಾಗಿದೆ. ಯಾಜ್ಞವಲ್ಕ್ಯ – ಮೈತ್ರೇಯಿ ಸಂವಾದ, ಜನಕ – ಯಾಜ್ಞವಲ್ಕ್ಯಸಂವಾದ – ಮುಂತಾದ ಕಥಾರೂಪಗಳಿಂದ ತತ್ತ್ವವನ್ನು ಹೃದಯಂಗಮವಾಗಿ ಪ್ರತಿಪಾದಿಸುವ ಉಪನಿಷತ್ತಿದು. ಆಚಾರ್ಯರು ತಮ್ಮ ಭಾಷ್ಯದಲ್ಲಿ ಅನೇಕ ವಿಷಯಗಳ ವಿಸ್ತಾರವಾದ ಚರ್ಚೆಯನ್ನು ಮಾಡಿ ಈ ಉಪನಿಷತ್ತಿನ ರಹಸ್ಯವನ್ನು ಹೊರಗೆಡವಿರುತ್ತಾರೆ. ಇಂಥ ಅಮೂಲ್ಯಗ್ರಂಥವು ವಿಷಯದಲ್ಲೂ ಆಕಾರದಲ್ಲೂ ಬ್ರಹ್ಮಸೂತ್ರಭಾಷ್ಯಕ್ಕೆ ಸರಿಸಮಾನವಾಗಿದೆ. ಎರಡು ಸಂಪುಟಗಳಲ್ಲಿ ಪೂರ್ತಿ ಉಪನಿಷತ್ತು ಭಾಷ್ಯ ಸಮೇತ ಪ್ರಕಟವಾಗಿದೆ. ಜಿಜ್ಞಾಸುಗಳು ಅವಶ್ಯವಾಗಿ ಸಂಗ್ರಹಿಸಬೇಕಾದ ಉಪನಿಷತ್ತಿದು.

*(೧ನೆಯ ಸಂಪುಟ ; ಎರಡನೆಯ ಮುದ್ರಣ : ೧೯೮೪ – ಪುಟಗಳು ಡೆಮ್ಮಿ ೩೨ +೭೩೬.*
*೨ನೆಯ ಸಂಪುಟ ; ಎರಡನೆಯ ಮುದ್ರಣ : ೧೯೮೫ – ಪುಟಗಳು ಡೆಮ್ಮಿ ೫೦+೧೦೧೦)*